ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ವಿದ್ಯುಚ್ಛಕ್ತಿ ಉತ್ಪಾದಿಸುವ ಬಗ್ಗೆ

ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು ) :-

734 (714) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ರಾಜ್ಯದಲ್ಲಿ ವಿದ್ಯುಚ್ಛಕ್ತಿ ಉತ್ಪಾದಿಸಲು ಎಷ್ಟು ಮನೆಗಳಿಗೆ ಸೋಲಾರ್ ಮೇಲ್ಛಾವಣಿ ಘಟಕಗಳನ್ನು ಅಳವಡಿಸಲಾಗಿದೆ ; (ಜಿಲ್ಲಾವಾರು ವಿವರಗಳನ್ನು ಒದಗಿಸುವುದು)

(ಆ) ರಾಜ್ಯದಲ್ಲಿ ಪ್ರಸ್ತುತ ಬೇಡಿಕೆ ಇರುವ ವಿದ್ಯುಚ್ಛಕ್ತಿ ಎಷ್ಟು ; ಯಾವ ಮೂಲಗಳಿಂದ ಉತ್ಪಾದಿಸಲಾಗಿದೆ ; ತಗಲುವ ವೆಚ್ಚ ಎಷ್ಟು ;

(ಇ) ರಾಜ್ಯದಲ್ಲಿ ಸೋಲಾರ್ ಮೂಲಕ ಉತ್ಪಾದಿಸುವ ವಿದ್ಯುಚ್ಛಕ್ತಿ ಎಷ್ಟು; ಯೂನಿಟ್ ಒಂದಕ್ಕೆ ತಗಲುವ ವೆಚ್ಚ ಎಷ್ಟು ;

(ಈ) ರಾಜ್ಯದಲ್ಲಿ ಸೋಲಾರ್ ವಿದ್ಯುಚ್ಛಕ್ತಿ ಉತ್ಪಾದನೆಗೆ ಪ್ರೋತ್ಸಾಹಿಸಲು ಸರ್ಕಾರ ಕೈಗೊಂಡ ಯೋಜನೆಗಳು ಯಾವುವು; (ವಿವರಒದಗಿಸುವುದು)

(ಉ) ಕಿಲೋವ್ಯಾಟ್ ಒಂದಕ್ಕೆ ಸೋಲಾರ್ ಪ್ಯಾನಲ್‌ಗಳಿಗೆ ತಗಲುವ ವೆಚ್ಚ ಎಷ್ಟು ; ಉತ್ಪಾದನೆಯಾಗುವ ವಿದ್ಯುತ್ ಎಷ್ಟು ? (ವಿವರ ನೀಡುವುದು)